# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ . | 163 |
| ಸದಸ್ಯರ ಹೆಸರು | ಶ್ರೀ ಎಸ್. ಅಪ್ಪಾಜಿಗೌಡ |
| ಉತ್ತರಿಸಬೇಕಾದ ದಿನಾಂಕ | 02.03.2020 |
| ಉತ್ತ ರಿಸುವ ಸಚಿವರು | ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆವತಿಯಿಂದ ಕಾರ್ಯನಿರ್ವಹಿಸುತ್ತಿರುವ ವಿದ್ಯಾರ್ಥಿನಿಲಯಗಳಿಗೆ ಅಡುಗೆಯವರು, ಅಡುಗೆ ಸಹಾಯಕರು ಮತ್ತು ರಾತ್ರಿ ಕಾವಲುಗಾರರ ಸಿಬ್ಬಂದಿಗಳ ಸೇವೆಯನ್ನು ಒದಗಿಸಲು ಹೊರ ಸಂಪನ್ಮೂಲ ಏಜೆನ್ಸಿಯವರಿಗೆ ಟೆಂಡರ್ ನಿಬಂಧನೆಗಳಿಗೊಳಪಟ್ಟು ಕಾರ್ಯಾದೇಶವನ್ನು ನೀಡಿರುವುದು ನಿಜವೇ: | ಹೌದು,<br>ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಲ್ಲಿ ಖಾಲಿ ಇರುವ ಅಡುಗೆಯವರು, ಅಡುಗೆ ಸಹಾಯಕರು ಹಾಗೂ ರಾತ್ರಿ ಕಾವಲುಗಾರರ ಸೇವೆಯನ್ನು ಪಡೆಯಲು ಜಿಲ್ಲಾ ಮಟ್ಟದಲ್ಲಿ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಟೆಂಡರ್ ಕರೆದು ಹೊರಸಂಪನ್ಮೂಲ ಏಜೆನ್ಸಿಯನ್ನು ನಿಗಧಿಪಡಿಸಿ ಕಾರ್ಯಾದೇಶವನ್ನು ಜಿಲ್ಲಾ ಮಟ್ಟದಲ್ಲಿ ನೀಡಲಾಗುತ್ತದೆ. |
| ಆ | ಕಾರ್ಯಾದೇಶದಲ್ಲಿನ ಷರತ್ತಿನನ್ವಯ ಮುಂಗಡವಾಗಿ ಕನಿಷ್ಠ 2 ಮಾಹೆಗಳಿಗೆ ಕನಿಷ್ಠ ವೇತನ ಕಾಯ್ದೆಯನ್ವಯ ಸಂದಾಯವಾಗಬೇಕಾದ ವೇತನವನ್ನು ಸಂಬಂಧಿಸಿದ ಸಿಬ್ಬಂದಿಗಳ ಬ್ಯಾಂಕ್ ಖಾತೆಗೆ ಇ.ಸಿ.ಎಸ್. ಅಥವಾ ಆರ್.ಟಿ.ಜಿ.ಎಸ್ ಮೂಲಕ ಪ್ರತಿ ತಿಂಗಳು 5ನೇ ದಿನಾಂಕದೊಳಗೆ ವೇತನ ಪಾವತಿಸಬೇಕಾಗಿರುವುದು ನಿಜವಲ್ಲವೇ: | ಹೌದು,<br>ಹೊರಸಂಪನ್ಮೂಲ ಏಜೆನ್ಸಿಯನ್ನು ನಿಗಧಿಪಡಿಸಿ ಷರತ್ತುಗಳನ್ನು ವಿಧಿಸಿ ಕಾರ್ಯಾದೇಶವನ್ನು ಜಿಲ್ಲಾ ಮಟ್ಟದಲ್ಲಿ ನೀಡಲಾಗುತ್ತದೆ. ಸದರಿ ಆದೇಶದಲ್ಲಿ ಕನಿಷ್ಠ 2 ಮಾಹೆಗಳಿಗೆ ವೇತನವನ್ನು ಪ್ರತಿ ತಿಂಗಳು 5 ನೇ ತಾರೀಖಿನೊಳಗೆ ಪಾವತಿಸುವ ಷರತ್ತನ್ನು ವಿಧಿಸಲಾಗಿರುತ್ತದೆ. |
| ಇ | ಸರ್ಕಾರದಿಂದ ನಿಗದಿತ ಅನುದಾನ ಬಿಡುಗಡೆಯಾಗದಿರುವುದರಿಂದ 4-5 ತಿಂಗಳಾದರೂ ಸದರಿ ಏಜೆನ್ಸಿಯಡಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಸಿಬ್ಬಂದಿಗಳ ಜೀವನ ನಿರ್ವಹಣೆಗೆ ತುಂಬಾ ತೊಂದರೆಯಾಗಿರುವ ವಿಷಯ ಸರ್ಕಾರದ ಗಮನಕ್ಕೆ ಬಂದಿದೆಯೇ: | ಬಂದಿದೆ |

| | | |
|---|---|---|
| ಈ | ಹಾಗಿದ್ದಲ್ಲಿ, ಸಿಬ್ಬಂದಿಗಳಿಗೆ ಕೂಡಲೇ ವೇತನವನ್ನು ಪಾವತಿಸುವ ಸಂಬಂಧ ಸರ್ಕಾರ ಹಣ ಬಿಡುಗಡೆಗೊಳಿಸಲು ಕೈಗೊಂಡಿರುವ ಕ್ರಮಗಳೇನು? (ಸಂಪೂರ್ಣ ಮಾಹಿತಿ ನೀಡುವುದು) | ಹೊರಸಂಪನ್ಮೂಲ ಸಿಬ್ಬಂದಿಗಳ ವೇತನಕ್ಕೆ ಕೊರತೆಯಾಗಿರುವ ಅನುದಾನವನ್ನು ಹೆಚ್ಚುವರಿಯಾಗಿ ಒದಗಿಸಲು ಆರ್ಥಿಕ ಇಲಾಖೆಗೆ ಪ್ರಸ್ತಾವನೆ ಸಲ್ಲಿಸಲಾಗಿದೆ.. |

ಸಂಖ್ಯೆ:ಹಿಂವಕ 64 ಬಿಇಟಿ 2020

(ಬಿ. ಶ್ರೀರಾಮುಲು)
ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು